ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತನೆಯ ಅಧಿವೇಶನ

ಶುಕ್ರವಾರ, ದಿನಾಂಕ : 13 ನೇ ಮಾರ್ಚ್, 2020

ಗ್ರಾಮೀಣ ಕ್ರೀಡೆಗಳ ಅಭಿವೃದ್ಧಿ ಕುರಿತು

ಶ್ರೀ ಎನ್. ರವಿಕುಮಾರ್(ವಿಧಾನ ಸಭೆಯಿಂದ ಚುನಾಯಿತರಾದವರು):-

922 (981) ಮಾನ್ಯ ಪ್ರವಾಸೋದ್ಯಮ, ಕನ್ನಡ ಮತ್ತು ಸಂಸ್ಕೃತಿ ಹಾಗೂ ಯುವ ಸಬಲೀಕರಣ ಮತ್ತು ಕ್ರೀಡಾ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ಗ್ರಾಮೀಣ ಕ್ರೀಡೆಗಳ ಉಳಿವು ಮತ್ತು ಬೆಳವಣಿಗೆಗೆ ಸರ್ಕಾರ ಯಾವ ಕ್ರಮ ಕೈಗೊಂಡಿದೆ;

(ಆ) ಗ್ರಾಮೀಣ ಕ್ರೀಡೆಯೆಂದು ಸರ್ಕಾರ ಯಾವ ಯಾವ ಕ್ರೀಡೆಗಳನ್ನು ಗುರುತಿಸಿದೆ;

(ಇ) ರಾಜ್ಯ ಮಟ್ಟದ ಗ್ರಾಮೀಣ ಕ್ರೀಡಾ ಕೂಟ ಸಂಘಟಿಸಲು ಸರ್ಕಾರ ಯಾವ ಕ್ರಮ ಕೈಗೊಂಡಿದೆ ;

(ಈ) ಇಂದಿನ ದಿನಗಳಲ್ಲಿ ಹಲವಾರು ಗ್ರಾಮೀಣ ಕ್ರೀಡೆಗಳು, ಜಾನಪದ ಕ್ರೀಡೆಗಳು ನಶಿಸಿ ಹೋಗುತ್ತಿದ್ದು ಅಂತಹ ಕ್ರೀಡೆಗಳನ್ನು ಗುರುತಿಸಿ ದಾಖಲಿಸುವ ಕಾರ್ಯವನ್ನು ಸರ್ಕಾರ ಮಾಡುತ್ತಿದೆಯೇ; ಇದುವರೆಗೆ ಎಷ್ಟು ಕ್ರೀಡಾ ಪ್ರಕಾರಗಳನ್ನು ದಾಖಲಿಸುವ ಕಾರ್ಯವಾಗಿದೆ ?